ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಮಂಗಳವಾರ, ದಿನಾಂಕ : 23ನೇ ಜುಲೈ, 2019

ಬೆಂಗಳೂರು ವಿಶ್ವವಿದ್ಯಾಲಯದ ದೃಶ್ಯ ಕಲಾವಿಭಾಗದ ಅರ್ಹ ಖಾಯಂ ಅಧ್ಯಾಪಕರಿಲ್ಲದಿರುವ ಬಗ್ಗೆ

ಶ್ರೀ ಹೆಚ್. ಎಂ. ರೇವಣ್ಣ (ವಿಧಾನಸಭೆಯಿಂದ ಚುನಾಯಿತರಾದವರು) :-

529 (527) ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ವಿಶ್ವವಿದ್ಯಾಲಯ ದೃಶ್ಯ ಕಲಾವಿಭಾಗದ (ವಿಶುಯಲ್ ಆರ್ಟ್ಸ್ ) ಅರ್ಹ ಖಾಯಂ ಅಧ್ಯಾಪಕರಿಲ್ಲದೇ ಪಿ.ಹೆಚ್.ಡಿ. ಮಾರ್ಗದರ್ಶನ ಮತ್ತು ಸಂಶೋಧನಾ ಕಾರ್ಯ ನಡೆಯದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಈ ಬಗ್ಗೆ ವಿಶ್ವವಿದ್ಯಾಲಯ/ ಸರ್ಕಾರ ಏನು ಕ್ರಮ ಕೈಗೊಂಡಿದೆ;

(ಇ) ಈ ವಿಭಾಗಗಳಲ್ಲಿ ವಿದ್ಯಾರ್ಥಿಗಳಿಗೆ ವೇಳಾ ಪಟ್ಟಿಯನ್ನು ನೀಡದೆ ತರಗತಿಯನ್ನು ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಈ) ಈ ವಿಭಾಗದಲ್ಲಿ ಎಲ್ಲಾ ಕೋರ್ಸ್‌ಗಳಿಗೆ ಸಂಬಂಧಿಸಿದ ವೇಳಾಪಟ್ಟಿಯನ್ನು ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ ?